8.

# ಶ್ರೀ ಗಾಯತ್ರಿಯಲ್ಲಿ ವ್ಯಾಸ ಚಿಂತನ




ಲೇಖಕರು :

**ಶ್ರೀ ವಿದ್ಯೇಶ ತೀರ್ಥರು**

ಭಂಡಾರಕೇರಿ ಮಠ


ಸಮರ್ಪಣೆ :

**ಶ್ರೀ ವೇದವ್ಯಾಸ ಜಯಂತಿ ಮಹೋತ್ಸವ, ಹೈದರಾಬಾದ್**

**ಶ್ರೀ ರಾಘವೇಂದ್ರ ಸ್ವಾಮಿ ಮಠ**

ಲಿಂಗಂಪಲ್ಲಿ

**8- 5- 98**

ಶ್ರೀ ವಿದ್ಯಾಮಾನ್ಯಾಂತರ್ಗತ ಶ್ರೀಮಧ್ವಾಂತರ್ಗತ

ಶ್ರೀ ವ್ಯಾಸಾರ್ಪಣಮಸ್ತು **ಬೆಲೆ : ರೂ. 5.00**

# ಶ್ರೀ ಗಾಯತ್ರಿಯಲ್ಲಿ ವ್ಯಾಸ ಚಿಂತನ

ಭಗವಾನ್ ನಾರಾಯಣನು ಬ್ರಹ್ಮ ರುದ್ರಾದಿ ದೇವತೆಗಳ ಪ್ರಾರ್ಥನೆಯಿಂದ ಕರುಣಾಜಲದಿಂದ ಆರ್ದ್ರವಾದ ಅಂತಃರಕಣದಿಂದ, ಮಲಿನವಾದ ಜ್ಞಾನದ ಶುದ್ಧೀಕರಣಕ್ಕಾಗಿ ಪರಾಶರ-ಸತ್ಯವತಿ ದಂಪತಿಗಳನ್ನು ನಿಮಿತ್ತವಾಗಿಟ್ಟುಕೊಂಡು ಯಮುನಾದ್ವೀಪದಲ್ಲಿ ವ್ಯಾಸರೂಪದಿಂದ ಪ್ರಕಟನಾದನು. ಅದಕೆಂದೆ ಆತ ''ದ್ವೈಪಾಯನ'' ಎನಿಸಿದನು.

ಶ್ರೀ ಧರ್ಮದ ಎರಡು ಪಾದಗಳ ಹ್ರಾಸ, ಮತ್ತು ವಿಶೇಷತಃ ಗೌತಮ ಋಷಿಗಳ ಶಾಪದ ಪ್ರಭಾವದಿಂದ ದ್ವಿಜರಲ್ಲಿ ಜ್ಞಾನವು ಸಂಪೂರ್ಣವಾಗಿ ಹಾನಿಯನ್ನು ಹೊಂದಿತು.

ವ್ಯಾಸರು ತಾವು ಪ್ರಕಟವಾದೊಡನೆ ತಂದೆ ಪರಾಶರರಿಂದ ಲೋಕ ಶಿಕ್ಷಣಾರ್ಥವಾಗಿ ಉಪನಯನ ಸಂಸ್ಕಾರವನ್ನು ಹೊಂದಿದರು. ಬಳಿಕ ಯಾವ ಗುರುವನ್ನೂ ಆಶ್ರಯಿಸದೆ ತಮ್ಮದೇ ಆದ ಸ್ವಭಾವಸಿದ್ಧ ಪ್ರತಿಭಾ ಬಲದಿಂದ ಎಲ್ಲವನ್ನು ಅರಿತಿರುವ ಇವರು, ತಂದೆಗೇ ಜ್ಞಾನಪ್ರದಾನ ಮಾಡಿದರು. ನಂತರ ಬ್ರಹ್ಮರುದ್ರಾದಿ ದೇವತೆಗಳಿಂದ ಹಿಂಬಾಲಿಸಲ್ಪಟ್ಟ ಇವರು, ಅವರಿಗೆ ಮೇರು ಪರ್ವತದಲ್ಲಿ ವೇದಾದಿ ಜ್ಞಾನವನ್ನು ಉಪದೇಶಿಸಿದರು. ವೇದಾರ್ಥದ ನಿರ್ಣಯಕ್ಕಾಗಿ ಬ್ರಹ್ಮಸೂತ್ರವನ್ನು ರಚಿಸಿದರು. ಸಮಸ್ತ ಶಾಸ್ತ್ರಾರ್ಥವನ್ನು ದೃಷ್ಟಾಂತಗಳಿಂದ ಸಜ್ಜನರಿಗೆ ಮನದಟ್ಟು ಮಾಡಲು ದೃಷ್ಟಾಂತ ಪ್ರದರ್ಶಕ ಮಹಾ ಭಾರತವನ್ನೂ ರಚಿಸಿದರು.

ಅದನ್ನು ವ್ಯಾಸರ ಮುಖದಿಂದ ಬ್ರಹ್ಮ ರುದ್ರಾದಿ ಸುರರು ಶ್ರವಣ ಮಾಡಿದರು. ವ್ಯಾಸರ ವಾಙ್ಮಯ ಬಾಣಗಳಿಂದ ಅಜ್ಞಾನ - ಮಿಥ್ಯಾ ಜ್ಞಾನಗಳ ಅಭಿಮಾನಿಯಾದ ಕಲಿಯು ರುದ್ರಾದಿ ದೇವತೆಗಳಲ್ಲಿ ಛಿನ್ನ-ಭಿನ್ನ ಶಿರಸ್ಕನಾದನು. ಆದರೆ ಮನುಷ್ಯೋತ್ತಮರ ಹೃದಯದಲ್ಲಿ ಯಾವಹಾನಿಯನ್ನೂ ಹೊಂದದೆ ಸುಖವಾಗಿ ಇದ್ದನು. ಅಂದರೆ ಮನುಷ್ಯೋತ್ತಮರ ಹೃದಯದಲ್ಲಿ ಅಜ್ಞಾನ-ಮಿಥ್ಯಾ ಜ್ಞಾನಗಳು ವಿನಾಶವನ್ನು ಹೊಂದಲಿಲ್ಲ. ಆಗ ಶ್ರೀ ವ್ಯಾಸರು ಅವರ ಹೃದಯದಿಂದಲೂ ಅಜ್ಞಾನ - ಮಿಥ್ಯಾ ಜ್ಞಾನಗಳ ಅಭಿಮಾನಿಯಾದ ಕಲಿಯನ್ನು ದೂರಕ್ಕೆ ಅಟ್ಟಲು ಪ್ರವೃತ್ತರಾದರು.

ಆ ಕಾಲದಲ್ಲಿ ದ್ವಿಜರಲ್ಲಿ ಅಲ್ಪಬುದ್ಧಿ - ಅಲ್ಪಾಯುಷ್ಯ - ಅಲ್ಪ ಶ್ರದ್ಧೆ ಮುಂತಾದ ನ್ಯೂನತೆಯನ್ನು ಗುರುತಿಸಿದ ಶ್ರೀ ವ್ಯಾಸರು ಪೂರ್ವದಲ್ಲೆ ಮೂಲವೇದ ದಿಂದ ವಿಭಕ್ತ ಗೊಂಡು ''ಉಪವೇದ'' ವೆಂದು ಪ್ರಖ್ಯಾತವಾದ ಋಗ್ವೇದಾದಿಗಳನ್ನು ಪುನಃ ವಿಭಾಗಮಾಡಿದರು.

ಋಗ್ವೇದವನ್ನು 24 ಶಾಖೆಗಳಲ್ಲಿ ವಿಭಕ್ತಗೊಳಿಸಿದರು. ಯಜುರ್ವೇದವನ್ನು 101 ಶಾಖೆಗಳಲ್ಲಿ ವಿಭಕ್ತ ಗೊಳಿಸಿದರು. ಸಾಮವೇದವನ್ನು 1000 ಶಾಖೆಗಳಲ್ಲಿ ಹಾಗೂ

ಅಥರ್ವಣ ವೇದವನ್ನು 12 ಶಾಖೆಗಳಲ್ಲಿ ವಿಭಕ್ತ ಗೊಳಿಸಿದರು. ಇದರಿಂದ ಅಲ್ಪ ಮತಿ ಆಯುಷ್ಯವುಳ್ಳ ದ್ವಿಜರೂ ವೇದವನ್ನು ತಮ್ಮ ಬುದ್ಧಿಯಲ್ಲಿ ತುಂಬಿಸಿ ಕೊಳ್ಳಲು ಅವಕಾಶವನ್ನು ವ್ಯಾಸರು ಕಲ್ಪಿಸಿದರು. ವಿಭಕ್ತ ವೇದಗಳ ನಿರ್ಣಯಕ್ಕಾಗಿ ಪೂರ್ವದಲ್ಲೇ ಮಹಾಭಾರತವನ್ನು ರಚಿಸಿದ ದ್ವೈಪಾಯನರು ಭಗವಂತನ ಪಾರಮ್ಯವನ್ನು ಸಮಾಧಿ ಭಾಷೆ (ತತ್ತ್ವ ಜ್ಞಾನಕ್ಕೆ ಅನುಕೂಲವಾದ ಭಾಷೆ) ಯಿಂದ ಪ್ರತಿಪಾದಿಸುವ ಭಾಗವತಾದಿ ಸಾತ್ತ್ವಿಕ ಪುರಾಣಗಳನ್ನು ನಿರ್ಮಿಸಿದರು.

ಇದರಿಂದ ಮನುಷ್ಯೋತ್ತಮರ ಹೃದಯದಿಂದಲೂ ವ್ಯಾಸರು ಕಲಿಯನ್ನು ಉಚ್ಚಾಟಿಸಿದರು. ಬಳಿಕ ವ್ಯಾಸರು ಅಜ್ಞಾನ ಕತ್ತಲೆಯಲ್ಲಿ ಮುಳುಗಿದ ಸಜ್ಜನರನ್ನು ತಮ್ಮ ಉಪದೇಶ ರಶ್ಮಿಯಿಂದ ಕತ್ತಲೆ ಯಿಂದ ವಿಮುಕ್ತಿ ಗೊಳಿಸಿದರು. ಹೀಗೆ ತನ್ನ ಸಂಚಾರದಿಂದ ಸಜ್ಜನರ ಅಜ್ಞಾನ ಕತ್ತಲೆಯನ್ನು ದೂರೀಕರಿಸಿದ್ದರಿಂದ ''ಜ್ಞಾನ ಸೂರ್ಯ'' ಎನಿಸಿದರು.

ಈ ರೀತಿಯಾಗಿ ಸಂಚರಿಸುತ್ತಿರುವಾಗ ಒಮ್ಮೆ ವ್ಯಾಸರು ದಾರಿಯಲ್ಲಿ ಒಂದು ಕೀಟವನ್ನು ಕಂಡರು. ಆ ಕೀಟವು ಹಿಂದಿನ ಜನ್ಮದಲ್ಲಿ ಶೂದ್ರ ಯೋನಿಯಲ್ಲಿ ಹುಟ್ಟಿದ ಭಕ್ತ. ಲೋಭದೋಷದಿಂದ ಕೀಟತ್ವವನ್ನು ಆ ಭಕ್ತ ಪಡೆದಿದ್ದನು.

ವ್ಯಾಸರು ಆ ಕೀಟವನ್ನುದ್ದೇಶಿಸಿ ಈ ಕೀಟದೇಹವನ್ನು ತೊರೆದು ''ನೀನು ರಾಜನಾಗು'' ಎಂದು ಹೇಳಿದರು. ಆದರೆ ದೇಹಾಭಿಮಾನದಿಂದ ಈ ಕೀಟವು ದೇಹವನ್ನು ತೊರೆಯಲು ಇಚ್ಛಿಸಲಿಲ್ಲ. ಆವಾಗ ಬಾದರಾಯಣರು ''ರಾಜ'' ನನ್ನಾಗಿ ಮಾಡಿದರು. ವ್ಯಾಸರ ಅನುಗ್ರಹದಿಂದ ಎಲ್ಲಾ ರಾಜರೂ ಆ ಕೀಟಕ್ಕೆ ಕರವನ್ನು ಅರ್ಪಿಸಿ ನಮಸ್ಕರಿಸಿದರು. ವ್ಯಾಸರು ಈ ಕ್ಷಣ ದಲ್ಲೆ ನಾನು ನಿನಗೆ ಮುಕ್ತಿಯನ್ನು ಪ್ರದಾನಮಾಡಬಲ್ಲೆ. ಆದರೆ ನೀನು ಮೂಲತಃ ಸ್ವರೂಪ ದೇಹದಲ್ಲಿ ಬ್ರಾಹ್ಮಣನಾಗಿರುವಿ.

ಯಾವ ಭಕ್ತನು ಸ್ವರೂಪ ದೇಹದಲ್ಲಿ ಎಂಥ ವರ್ಣದವನಾಗಿರುವನೋ ಅಂಥವರ್ಣದ ದೇಹವನ್ನೇ ಅಂತ್ಯ ಜನ್ಮದಲ್ಲಿ ಪಡೆದು ಮುಕ್ತನಾಗ ಬೇಕೆಂದು ನಾನು ಮಾಡಿದ ನಿಯಮ. ಆದುದರಿಂದ ಈ ನಿಯಮದ ಸಂರಕ್ಷಣೆಗಾಗಿ ಸಮರ್ಥನಾಗಿದ್ದರೂ ನಾನು ಈಗ ನಿನಗೆ ಮುಕ್ತಿಯನ್ನು ನೀಡುವುದಿಲ್ಲ. ಮುಂದಿನ ಜನ್ಮದಲ್ಲಿ ನೀನು ಬ್ರಾಹ್ಮಣ ಶ್ರೇಷ್ಠನಾಗಿ ಹುಟ್ಟಿ ನನ್ನ ಅನುಗ್ರಹದಿಂದ ಮುಕ್ತನಾಗು ಎಂದು ಅನುಗ್ರಹಿಸಿದರು. ಬಳಿಕ ವ್ಯಾಸರು ಆ ಕೀಟ ದೇಹದಲ್ಲಿ ನಿರ್ಮಲ ಜ್ಞಾನವನ್ನು ಪ್ರದಾನಮಾಡಿದರು. ಇಡಿ ಭೂಮಂಡಲವನ್ನು ಆಳಿದ ಈ ಕೀಟವು ಆ ದೇಹವನ್ನು ತ್ಯಜಿಸಿ ಬ್ರಾಹ್ಮಣನಾಗಿ ಹುಟ್ಟಿ ವ್ಯಾಸರ ಪರಮಾನುಗ್ರಹದಿಂದ ಮುಕ್ತಿಯನ್ನು ಪಡೆಯಿತು. ಹೀಗೆ ಎಷ್ಟೋ ಭಕ್ತರನ್ನು ವ್ಯಾಸರು ಸಂಸಾರ ದಿಂದ ವಿಮುಕ್ತಿಗೊಳಿಸಿದರು.

ಒಮ್ಮೆ ರುದ್ರ ದೇವರು ವ್ಯಾಸರ ಪುತ್ರರಾಗಿ ಜನಿಸ ಬೇಕೆಂದು ಬಯಸಿ ವ್ಯಾಸರನ್ನು ಕುರಿತು ಘೋರ ತಪೋಗೈದರು. ಆದರೆ ಮಂದಮತಿಗಳಿಗೆ ವ್ಯಾಸರೇ ಪುತ್ರಾರ್ಥಿಯಾಗಿ ರುದ್ರದೇವರನ್ನು ಕುರಿತು ತಪೋಗೈದವರಂತೆ ತೋರಿಸಿ ಮೋಹಿಸಿದರು. ಅಸುರ ಸ್ವಭಾವದ ಜನರನ್ನು ಮೋಹ ಗೊಳಿಸುವ ಸಲುವಾಗಿ ವ್ಯಾಸರು ಈ ನಟನೆಯನ್ನು ಮಾಡಿದರು.

ಒಮ್ಮೆ ವ್ಯಾಸರು ಅಸುರ ಜನರನ್ನು ವಂಚಿಸಲೆಂದೇ ಕಾಮುಕನಂತೆ ನಟಿಸಿದರು. ವ್ಯಾಸರು ಅಗ್ನಿಯನ್ನು ಉತ್ಪಾದಿಸುವ ಸಲುವಾಗಿ ಅರಣಿ ಮಥನ ಮಾಡುತ್ತಿದ್ದರು. ಆವಾಗ ಅರಣಿಯಲ್ಲಿ ರೇತಸ್ಸು ಸ್ಖಲಿತವಾಯಿತು. ಗಿಳಿ ರೂಪದಲ್ಲಿ ಬಂದ ಘೃತಾಚಿಯ ದರ್ಶನದಿಂದಲೇ ವ್ಯಾಸರಿಗೆ ರೇತಸ್ಸು ಸ್ಖಲಿತವಾಯಿತು, ಎಂದು ಅಸುರ ಜನರು ತಪ್ಪಾಗಿ ಭಾವಿಸಿದರು. ವಸ್ತುತಸ್ತು ಕಾಮಾದಿ ದೋಷ ಶೂನ್ಯರಾದ ವ್ಯಾಸರು ಪ್ರಾಕೃತವಾದ ರೇತಸ್ಸನ್ನು ಅಲ್ಲಿ ಸೃಷ್ಟಿಸಿದರೇ ವಿನಾ ಕಾಮದೋಷದಿಂದ ಅವರು ರೇತಸ್ಸನ್ನು ವಿಸರ್ಜನೆ ಮಾಡಲಿಲ್ಲ. ಪ್ರಾಕೃತ ಮನುಷ್ಯರಿಗೆ ಹೆಣ್ಣು ಗಿಳಿಯನ್ನು ನೋಡಿ ಕಾಮ ವಿಕಾರ ಸಂಭವಿಸುವುದಿಲ್ಲ. ಹೀಗಿರುವಾಗ ಸಾಕ್ಷಾತ್ ಭಗವತ್ ಸ್ವರೂಪರಾದ ವ್ಯಾಸರಿಗೆ ಈ ದೋಷ ಹೇಗೆ ಸಂಭವಿಸ್ಸಿತು ? ಗಿಳಿ ರೂಪದಲ್ಲಿ ಬಂದ ಘೃತಾಚಿಯಿಂದ ಪ್ರಾರ್ಥಿತರಾಗಿ ಅವಳನ್ನು ಸಂಪರ್ಕಿಸಿದ ವ್ಯಾಸರು ಅರಣಿಯಲ್ಲಿ ''ಶುಕ'' ನಾಮಕನಾದ ರುದ್ರ ಸ್ವರೂಪನಾದ ಮಗನನ್ನು ಸೃಷ್ಟಿಸಿದರು. ಆವಾಗ ಆ ಶುಕನಲ್ಲಿ ವೇದವ್ಯಾಸರ ಸೇವೆಗಾಗಿ ವಾಯುದೇವರು ಪ್ರವೇಶಿಸಿದರು. ಆಗ ಅವರಿಗೆ ವ್ಯಾಸರು ವೇದ ಭಾರತ - ಭಾಗವತಾದಿ ಸಚ್ಛಾಸ್ತ್ರಗಳನ್ನು ಉಪದೇಶಿಸಿದರು. ಶೇಷ ದೇವರು ''ಪೈಲ'' ಎಂಬ ವ್ಯಾಸ ಶಿಷ್ಯರೊಳಗೆ ಪ್ರವೇಶಿಸಿದರು. ವರುಣ ಪುತ್ರರಾದ ಸುಮಂತು ವಿನೊಳಗೆ ಗರುಡ ದೇವರು ಪ್ರವೇಶಿಸಿದರು. ಬ್ರಹ್ಮ ದೇವರು ವೈಶಂಪಾಯನನ್ನು ಪ್ರವೇಶಿಸಿದರು. ಇಂದ್ರ ದೇವರು ಜೈಮಿನಿಯೊಳಗೆ ಪ್ರವೇಶ ಮಾಡಿದರು. ಈ ಹಿಂದೆ ಹೇಳಿದ ದೇವತೆಗಳಿಂದ ಆವಿಷ್ಟರಾದ ಪೈಲಾದಿ ಶಿಷ್ಯರಿಗೆ ಸಕಲ ವಿದ್ಯೆಗಳನ್ನು ಉಪದೇಶಿಸಿ ವ್ಯಾಸರು ಒಬ್ಬೊಬ್ಬ ಶಿಷ್ಯರನ್ನು ಒಂದೊಂದು ವಿದ್ಯೆಗೆ ಪ್ರಚಾರಕರನ್ನಾಗಿ ನಿಯುಕ್ತಿ ಗೊಳಿಸಿದರು.

ಋಗ್ವೇದ ಪ್ರಚಾರಕನಾಗಿ ''ಪೈಲ''ನನ್ನು, ಕೃಷ್ಣಯಜುರ್ವೇದದ ಪ್ರಚಾರಕನಾಗಿ ''ವೈಶಂಪಾಯನ''ನನ್ನು ಶುಕ್ಲ ಯಜುರ್ವೇದದ ಪ್ರಚಾರಕನಾಗಿ ''ಸೂರ್ಯ''ನನ್ನೂ ಸಾಮವೇದದ ಪ್ರವರ್ತಕನಾಗಿ ''ಜೈಮಿನಿ'' ಯನ್ನು ಹಾಗು ಅಥರ್ವ- ಅಂಗೀರಸರಿಂದ ದೃಷ್ಟವಾದ ಅಥರ್ವಣವೇದದ ಪ್ರಚಾರಕನಾಗಿ ''ಸುಮಂತು'' ವನ್ನು ನಿಯುಕ್ತಿಗೋಳಿಸಿದರು. ಭಾರತ ಪ್ರಚಾರಕನಾಗಿ ''ವೈಶಂಪಾಯನ''ರು ವ್ಯಾಸರಿಂದ ನಿಯುಕ್ತರಾದರು. ಮನುಷ್ಯರಿಗೂ ಗಂಧರ್ವಾದಿ ಗಳಿಗೂ ವೇದಾದಿ ಶಾಸ್ತ್ರಗಳನ್ನು ಪ್ರಚಾರಮಾಡಲು ತನ್ನ ಪುತ್ರರಾದ ಶುಕರಿಗೆ ಆದೇಶಿಸಿದರು. ವಾಯು, ಗರುಡ ,

ಶೇಷ, ಬ್ರಹ್ಮ, ಇಂದ್ರ, ಸೂರ್ಯ ಮುಂತಾದ ದೇವತೆಗಳಿಂದ ಭಿನ್ನರಾದ ಇತರ ದೇವತೆಗಳಿಗೆ ಜ್ಞಾನಪ್ರಸಾರಮಾಡಲು ನಾರದರಿಗೆ ಆಜ್ಞೆಮಾಡಿದರು.

ನಂತರ ವ್ಯಾಸರು ತಮ್ಮ ರೋಮಾಂಚನದಿಂದ ''ರೋಮಹರ್ಷಣ'' ಎಂಬ ಸೂತಜಾತಿಯ ಮಗನನ್ನು ಸೃಷ್ಟಿಸಿದರು. ಆತನನ್ನು ಭಾರತ, ಮೂಲ ರಾಮಾಯಣ ,ಪಂಚರಾತ್ರ ಮುಂತಾದ ಪೌರುಷೇಯ ಗ್ರಂಥಗಳ ಪ್ರಸಾರ ಕಾರ್ಯದಲ್ಲಿ ನಿಯೋಜಿಸಿದರು. ರೋಮ ಹರ್ಷನೊಳಗೆ ಕಾಮ ದೇವನು ಪ್ರವೇಶಿಸಿದನು. ಆಗ ವ್ಯಾಸರು ಆತನಿಗೆ ಸಕಲ ಜ್ಞಾನವನ್ನು ಉಪದೇಶಿಸಿದರು. ಬಳಿಕ ಬಾದರಾಯಣರು ಸನತ್ ಕುಮಾರಾದಿಗಳನ್ನು ಯೋಗ ಶಾಸ್ತ್ರದ ಪ್ರವರ್ತಕರನ್ನಾಗಿ ನಿಯೋಜಿಸಿದರು. ಭೃಗು ಮುಂತಾದ ಋಷಿಗಳನ್ನು ಜ್ಞಾನಪ್ರದಾನ ಮಾಡಿ ಕರ್ಮ ಯೋಗದ ಪ್ರವರ್ತಕರನ್ನಾಗಿ ನಿಯುಕ್ತಿ ಗೊಳಿಸಿದರು. ಜೈಮಿನಿಯನ್ನು ಕರ್ಮ ಮೀಮಾಂಸಾ ಶಾಸ್ತ್ರವನ್ನು ರಚಿಸಲು ಆದೇಶಿಸಿ ಆತನಿಂದ ಆ ಕೆಲಸವನ್ನು ಮಾಡಿಸಿದರು. ದೈವೀ ಮೀಮಾಂಸಾ ಶಾಸ್ತ್ರದ ಆದಿ ಸೂತ್ರವಾದ ''ಅಥಾತೋ ದೈವೀ ಮೀಮಾಂಸಾ'' ಹಾಗೂ ಅಂತಿಮ ಸೂತ್ರಗಳಾದ ''ಸವಿಷ್ಣುರಾಹಹಿ'' ''ತಂ ಬ್ರಹ್ಮೇತ್ಯಾಚಕ್ಷತೇ'' ಎರಡು ಸೂತ್ರಗಳನ್ನು ತಾವೇ ರಚಿಸಿ ಉಳಿದ ಸೂತ್ರಗಳನ್ನು ರಚಿಸಲು ಪೈಲ - ಶೇಷ ದೇವರಿಗೆ ಆಜ್ಞೆ ಮಾಡಿದರು. ಬಳಿಕ ವ್ಯಾಸರು ವಿವಿಧ ಪುರಾಣಗಳನ್ನು ನಿರ್ಮಿಸಿದರು. ಅಸುರ ಜನರಿಗೆ ತತ್ತ್ವ ವಿಷಯದಲ್ಲಿ ಗೊಂದಲವನ್ನುಂಟು ಮಾಡುವ ಸಲುವಾಗಿ ಶಿವ ಪಾರಮ್ಯವನ್ನು ಸಾರುವ ತಾಮಸವಾದ ಪಾಶುಪತಾಗಮವನ್ನು ಮೂಲಾಧಾರವಾಗಿ ಸ್ವೀಕರಿಸಿ ಶಿವನ ಪಾರಮ್ಯವನ್ನು ಸಾರುವ ಶೈವ ಮುಂತಾದ ತಾಮಸ ಪುರಾಣಗಳನ್ನು ರಚಿಸಿದರು. ಸಜ್ಜನರಿಗೆ ತತ್ತ್ವ ಜ್ಞಾನವನ್ನು ಹೊಂದಿಸುವ ಸಲುವಾಗಿ ಪರಮ ಸಾತ್ತ್ವಿಕವಾದ ಪಂಚರಾತ್ರ ಆಗಮವನ್ನು ಮೂಲ ಆಧಾರವನ್ನಾಗಿ ಅವಲಂಬಿಸಿ ವ್ಯಾಸರು ಭಾಗವತ, ವಿಷ್ಣು ಪುರಾಣ ಮುಂತಾದ ಸಾತ್ತ್ವಿಕ ಪುರಾಣಗಳನ್ನು ವಿರಚಿಸಿದರು. ವೇದಗಳಲ್ಲಿ ಮೇಲ್ನೋಟಕ್ಕೆ ''ಪ್ರಧಾನ'' ಪ್ರತಿ ಪಾದ್ಯರಂತೆ ಕಾಣಿಸಿಕೊಳ್ಳುವ ಬ್ರಹ್ಮ - ಅಗ್ನಿ - ಇಂದ್ರ ಮುಂತಾದ ದೇವತೆಗಳನ್ನು ಪ್ರಧಾನ ದೇವತೆಗಳಾಗಿ ವರ್ಣಿಸುವ ಆಗ್ನೇಯ ಮುಂತಾದ ರಾಜಸ ಪುರಾಣಗಳನ್ನೂ ವಿರಚಿಸಿದರು.

ದೇವತೆ, ಮುನಿಗಳು, ಮನುಷ್ಯೋತ್ತಮರು ಶ್ರೀ ವ್ಯಾಸರ ಅನುಗ್ರಹಬಲದಿಂದ ಸಾತ್ತ್ವಿಕ ಜ್ಞಾನ ಸಂಪತ್ತನ್ನು ಪಡೆದು ಆನಂದವನ್ನು ಹೊಂದಿದರು.

ಹೀಗೆ ಭಗವಾನ್ ವ್ಯಾಸರು ತಮ್ಮ ಜ್ಞಾನರೂಪ ಮಹಾ ಕಿರಣ ಸಮೂಹವನ್ನು ಎಲ್ಲಾ ಕಡೆಗಳಲ್ಲೂ ಪ್ರಸರಿಸಿ ಜಗತ್ತಿನಲ್ಲಿ ಕವಿದ ಅಜ್ಞಾನಾಂಧಕಾರವನ್ನು ದೂರಕ್ಕೆ ಅಟ್ಟಿ ''ದಿವ್ಯ ಸೂರ್ಯ'' ನಂತೆ ವಿರಾಜಿಸಿದರು. ಅವರು ಸದಾ ಬ್ರಹ್ಮಾದಿ ದೇವತೆಗಳಿಂದ ಸೇವಿಸಲ್ಪಟ್ಟ ಪಾದಕಮಲರು. ಅವರಲ್ಲಿ ತನ್ನ ರಹಸ್ಯವನ್ನು ಯಥಾಯೋಗ್ಯವಾಗಿ

ಬಯಲು ಗೊಳಿಸಿದರು. ಇಂದಿಗೂ ಮೇರು ಪರ್ವತ ಹಾಗೂ ಉತ್ತರ ಬದರಿಯಲ್ಲಿ ಆನಂದ ಪೂರ್ಣರಾಗಿ ವಿರಾಜಮಾನರಾಗಿದ್ದಾರೆ.

ಅವರು ಸಪ್ತ ಚಿರಂಜೀವಿಗಳಲ್ಲಿ ಪರಿಗಣಿತರಾಗಿದ್ದಾರೆ. ವೇದವನ್ನು ಕರ್ಷಣ ಅರ್ಥಾತ್ ವಿಭಾಗಮಾಡಿದ್ದರಿಂದ ''ಕೃಷ್ಣ'' ಎಂದೂ ಅವರು ಖ್ಯಾತರಾಗಿದ್ದಾರೆ.

ತತ್ತ್ವ ವಾದದಲ್ಲಿರತರಾದ ಜ್ಞಾನಿಗಳಿಗೆ ಆಶ್ರಯರೆನಿಸಿ ''ಬಾದರಾಯಣ'' ಎಂದು ಖ್ಯಾತನಾಮರಾಗಿದ್ದಾರೆ.

ಕಲಿಯುಗದಲ್ಲಿ ಮಧ್ವ ರೂಪದಿಂದ ಅವತರಿಸಿದ ವಾಯುದೇವರಿಗೂ ಜ್ಞಾನ ಕಾರ್ಯವನ್ನು ಮಾಡಲು ಪ್ರೇರಿಸಿದ್ದಾರೆ. ಅವರಿಗೂ ಜ್ಞಾನೋಪದೇಶವನ್ನೂ ಮಾಡಿದ್ದಾರೆ.

ಇಂಥ ಮಹಾನುಭಾವರಾದ ಭಗವಾನ್ ವ್ಯಾಸರು ಮಹಾಮಂತ್ರವಾದ ಗಾಯತ್ರಿ ಮಂತ್ರದಲ್ಲೂ ವರ್ಣಿತರಾಗಿದ್ದಾರೆ.

## ''ಧಿಯೋ ಯೋನಃ ಪ್ರಚೋದಯಾತ್''

ಯಃ = ಪ್ರಕಟಿತವಾದ ಅಪಾರ ಜ್ಞಾನ ಸ್ವರೂಪರಾದ ವ್ಯಾಸರು; ನಃ = ನಮ್ಮ, ಧಿಯಃ = ಕರ್ತವ್ಯ - ಅಕರ್ತವ್ಯಗಳ ಬಗೆಗಿನ ನಿರ್ಣಯಾತ್ಮಕವಾದ ಜ್ಞಾನವನ್ನು, ವೇದಗಳ ಅರ್ಥ - ಅಪಾರ್ಥಗಳ ಬಗೆಗಿನ ಖಚಿತವಾದ ಬೋಧವನ್ನೂ, ಉಪಾಸ್ಯ - ಅನುಪಾಸ್ಯ ಗಳ ಬಗೆಗಿನ ದೃಢವಾದ ಜ್ಞಾನವನ್ನೂ (ಮಹಾ ಭಾರತಾದಿ ನಿರ್ಮಾಣ ದಿಂದ) ಪ್ರಚೋದಯಾತ್ = ಪ್ರೇರಿಸುತ್ತಾರೆ.

(ತಸ್ಯ) = ಅಂಥ, ದೇವಸ್ಯ ಸವಿತುಃ = ಕುರುರಾಜರಾದ ಧೃತರಾಷ್ಟ್ರ ಹಾಗು ಪಾಂಡುರಾಜನ ಸ್ರಷ್ಟಾರರಾದ (ಅವರಿಬ್ಬರನ್ನು ಸೃಷ್ಟಿಮಾಡಿದ) ಅಥವಾ ದೇವಸ್ಯ ಸವಿತುಃ = ಕೀಟರೂಪದಲ್ಲೇ ತನ್ನ ಭಕ್ತನನ್ನು ರಾಜನನ್ನಾಗಿ ನಿರ್ಮಿಸಿದ ವ್ಯಾಸರ, ತತ್ = ಸರ್ವತ್ರ ವ್ಯಾಪ್ತವಾದ ಅಥವಾ ಗುಣಪೂರ್ಣವಾದ, ವರೇಣ್ಯಂ = ಬ್ರಹ್ಮಾದಿ ದೇವತೆಗಳಿಂದಲೂ ಜ್ಞಾನಾದಿ ಸಂಪತ್ತಿಗಾಗಿ ಭಜಿಸಲು ಯೋಗ್ಯವಾದ ಭರ್ಗಃ = ಪ್ರಕಾಶ, ಆನಂದ, ಜ್ಞಾನ ಸ್ವರೂಪವಾದ ಅಥವಾ ಅಪಾರ ಮೇಧಾರೂಪ ಅಂತಃ ತೇಜಃ ಸ್ವರೂಪವಾದ (ರೂಪಂ) ರೂಪವನ್ನು ಧೀಮಹಿ = ಧ್ಯಾನಿಸುತ್ತೇವೆ.

### ವಿಶೇಷಾಂಶಗಳು :

### 1 ಯಃ

ಆಚಾರ್ಯ ಮಧ್ವರು ''ಜ್ಞಾನತ್ವಾದ್ಯ ಇತೀರ್ಯತೇ'' ಎಂಬ ಉಕ್ತಿಯಿಂದ ಭಗವಂತನು ಜ್ಞಾನ ಸ್ವರೂಪನಾದುದರಿಂದ ''ಯಃ'' ಎಂದು ಖ್ಯಾತನಾಗಿದ್ದಾನೆಂದು

ಸ್ಪಷ್ಟಪಡಿಸಿದ್ದಾರೆ. ವ್ಯಾಸರೂಪದಲ್ಲಿ ಭಗವಂತನು ಮಹಾ ಜ್ಞಾನ ಕಾರ್ಯವನ್ನು ಮಾಡಿ, ಅಂಥ ಜ್ಞಾನಸ್ವರೂಪವನ್ನು ವಿಶೇಷವಾಗಿ ಪ್ರಕಟಿಸಿದ್ದರಿಂದ ಈ ರೂಪಕ್ಕೆ ಈ ಶಬ್ದವು ಈ ಅರ್ಥದಲ್ಲಿ ವಿಶೇಷವಾಗಿ ಸಮರ್ಪಕವೆನಿಸುತ್ತದೆ. ಅಮಿತ ಸೂರ್ಯಪ್ರಕಾಶ ಸ್ವರೂಪರಾಗಿ ಮಹಾಜ್ಞಾನಿಗಳಿಗೆ ವ್ಯಾಸರು ಪ್ರಕಟರಾಗಿದ್ದಾರೆ. ಆದುದರಿಂದ ಈ ಅರ್ಥದಲ್ಲೂ ''ಯಃ'' ಎಂಬ ಹೆಸರು ಅವರಿಗೆ ಅನ್ವರ್ಥವಾಗಿದೆ. ಆಚಾರ್ಯರು ಭಾಗವತತಾತ್ಪರ್ಯದಲ್ಲಿ ''ಯ'' ಶಬ್ದಕ್ಕೆ ಪ್ರಕಾಶ ರೂಪ ಎಂಬರ್ಥವನ್ನೂ ತಿಳಿಸಿದ್ದಾರೆ.

## 2 ''ಧಿಯೋ ಯೋನಃ ಪ್ರಚೋದಯಾತ್''

ಮಹಾಭಾರತಾದಿಗ್ರಂಥಗಳ ನಿರ್ಮಾಪಕ ರಾದ ವ್ಯಾಸರೇ ಎಲ್ಲಾ ಜ್ಞಾನಿಗಳಿಗೂ ಜ್ಞಾನಸ್ಫೂರ್ತಿಯನ್ನು ನೀಡುವವರು. ಕವಿಗಳೂ ಕೂಡಾ ವ್ಯಾಸರ ಮಹಾ ಭಾರತಾದಿ ಕೃತಿಗಳಿಂದ ಸ್ಫೂರ್ತಿಯನ್ನು ಪಡೆದೆ ಕಾವ್ಯವನ್ನು ನಿರ್ಮಿಸಿದ್ದಾರೆ. ಆದುದರಿಂದ ''ವ್ಯಾಸೋಚ್ಛಿಷ್ಟಂ ಜಗತ್ ಸರ್ವಂ'' ಎಂಬ ಮಾತು ಪ್ರಸಿದ್ಧಿಗೆ ಬಂತು.

ಜಯತಿ ಪರಾಶರಸೂನುಃ ಸತ್ಯವತೀ ಹೃದಯನಂದನೋ ವ್ಯಾಸಃ ।
ಯಸ್ಯಾಸ್ಯ ಗಲಿತಂ ವಾಙ್ಮಯಮ್ ಜಗತ್ ಪಿಬತಿ ॥

ಎಂಬ ಮಾತು ಕೂಡಾ ಎಲ್ಲರೂ ವ್ಯಾಸರ ವಾಙ್ಮಯ ಎಂಜಲನ್ನು ತಿಂದೇ ಜ್ಞಾನಪ್ರಧಾನವಾದ ಕ್ಷೇತ್ರದಲ್ಲಿ ಜೀವಂತವಾಗಿದ್ದಾರೆ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಆಚಾರ್ಯ ಮಧ್ವರು ಬುದ್ಧಿಃ = ಕಾರ್ಯಾಕಾರ್ಯನಿರ್ಣಯಃ

ಎಂದು ವ್ಯಾಖಾನಿಸಿದ್ದಾರೆ. ಇಲ್ಲಿ ಬುದ್ಧಿಶಬ್ದಪರ್ಯಾಯವಾದ ಧೀಶಬ್ದಕ್ಕೂ ಈ ಅರ್ಥವು ಅನ್ವಯಿಸುತ್ತದೆ.

ಆಚಾರ್ಯರ ಈ ವ್ಯಾಖ್ಯಾನದಿಂದ ''ಧಿಯೋಯೋನಃ ಪ್ರಚೋದಯಾತ್'' ಎಂಬ ಭಾಗವು ಹೊಸ ಆಯಾಮ ದಲ್ಲಿ ತೆರೆದು ಕೊಳ್ಳುತ್ತದೆ.

ಶ್ರೀ ವ್ಯಾಸರು ಸ್ಮೃತಿ ಮಹಾಭಾರತಾದಿ ಕೃತಿಗಳ ನಿರ್ಮಾಣದಿಂದ ಧರ್ಮಾಧರ್ಮಗಳ ಬಗೆಗಿನ ನಿರ್ಣಯಾತ್ಮಕ ಜ್ಞಾನವನ್ನು ಪ್ರಚೋದಿಸಿದರೆ, ಬ್ರಹ್ಮಸೂತ್ರಗಳ ರಚನೆಯಿಂದ ವೇದಗಳ ಅರ್ಥ - ಅಪಾರ್ಥಗಳ ಬಗೆಗಿನ ಖಚಿತವಾದ ಬೋಧವನ್ನು ಪ್ರೇರಿಸಿದ್ದಾರೆ. ಉಪಾಸ್ಯ - ಅನುಪಾಸ್ಯ ಜ್ಞೇಯ - ಅಜ್ಞೇಯಗಳ ಬಗೆಗಿನ ಬುದ್ಧಿಯನ್ನೂ ಪ್ರಚೋದಿಸಿದ್ದಾರೆ.

ಇಂಥ ವಿಶೇಷ ಬುದ್ಧಿಪ್ರದರಾದುದರಿಂದಲೇ ಶ್ರೀ ವ್ಯಾಸರನ್ನು ''ಸಮೇಂದ್ರೋ ಮೇಧಯಾ ಸ್ಪೃಣೋತು'' ಎಂದು ಉಪನಿಷತ್ತಿನಲ್ಲಿ ವಿಶೇಷವಾದ ಮೇಧಾ ಶಕ್ತಿಯ ಸಂಪತ್ತಿಗಾಗಿ ಪ್ರಾರ್ಥಿಸಲಾಗಿದೆ.

## 3. ದೇವಸ್ಯ ಸವಿತುಃ

''ರಾಜಾ ಭಟ್ಟಾರಕೋ ದೇವಃ'' ಎಂಬ ಕೋಶಾನುಸಾರವಾಗಿ ''ದೇವ'' ಶಬ್ದವು ''ರಾಜ'' ಎಂಬರ್ಥವನ್ನು ಸೂಚಿಸುತ್ತದೆ. ಏವಂಚ ''ದೇವಸ್ಯ ಸವಿತುಃ'' ಎಂಬ ವಚನವು ರಾಜರನ್ನು ಸೃಷ್ಟಿಸಿದವರು ಎಂಬರ್ಥವನ್ನು ಹೇಳುತ್ತದೆ.

ಶ್ರೀ ವೇದವ್ಯಾಸರು ಕುರುರಾಜರನ್ನು ಸೃಷ್ಟಿಸಿದವರು.

ಈ ಕಾರ್ಯದಿಂದ ಮಹಾಭಾರತದ ಘಟನಾವಳಿಗೆ ಮೂಲ ಪುರುಷರೆನಿಸಿದವರು.

ಚಿತ್ರಾಂಗದ - ವಿಚಿತ್ರ ವೀರ್ಯರು ಮೃತರಾದ ಬಳಿಕ ಭೀಷ್ಮರು ಸಿಂಹಾಸನವನ್ನು ಏರಲು ನಿರಾಕರಿಸಿದ ಪರಿಣಾಮವಾಗಿ ಕುರುಸಿಂಹಾಸನವು ನಾಯಕತ್ವದಿಂದ ರಿಕ್ತವಾಯಿತು. ಆಗ ಕಳವಳಗೊಂಡ ವ್ಯಾಸರ ಮಾತೆಯಾದ ಸತ್ಯವತಿಯು ವ್ಯಾಸರನ್ನು ಸ್ಮರಿಸಿದಳು. ಸ್ಮರಣ ಮಾತ್ರದಿಂದ ದರ್ಶನಭಾಗ್ಯವನ್ನು ನೀಡುವ ವರವನ್ನು ಅವರು ತಾಯಿಗೆ ಅನುಗ್ರಹಿಸಿದ್ದರಿಂದ ವ್ಯಾಸರು ಆಕೆಗೆ ಪ್ರತ್ಯಕ್ಷರಾದರು. ಆಗ ಆಕೆ ನಾಯಕತ್ವದ ಶೂನ್ಯತೆಯನ್ನು ನೀಗಿಸಲು ತನ್ನ ಸೊಸೆಯಲ್ಲಿ ಸಂತಾನವನ್ನು ಉತ್ಪಾದಿಸಲು ಕೇಳಿಕೊಂಡಳು.

ಆಗ ವ್ಯಾಸರು ಒಂದು ವರ್ಷದವರೆಗೆ ವೈಷ್ಣವ ವ್ರತದಿಂದ ದೇಹಶುದ್ಧಿಯನ್ನು ಹೊಂದಿದಬಳಿಕ ನನ್ನ ಸಂಗದಿಂದ ಶ್ರೇಷ್ಠ ಸಂತಾನವನ್ನು ಪಡೆಯಲಿ ಎಂದು ಸಲಹೆ ಮಾಡಿದರು. ಆದರೆ ಸತ್ಯವತಿಯು ನಾಯಕತ್ವದ ಕೊರತೆಯಿಂದ ರಾಷ್ಟ್ರವಿನಾಶ ವಾದೀತು ಎಂಬ ಭಯದಿಂದ ಆ ಸಲಹೆಯನ್ನು ಒಪ್ಪಲಿಲ್ಲ.

ಶೀಘ್ರವಾಗಿ ಸೊಸೆಯನ್ನು ಸಂಪರ್ಕಿಸಲು ಕೇಳಿಕೊಳ್ಳುತ್ತಾಳೆ. ಆಗ ವ್ಯಾಸರು ನಾನು ಸೌಮ್ಯ ಸ್ವರೂಪನಾದರೂ ತತ್‌ಕಾಲದಲ್ಲಿ ಮಹಾಭಯಂಕರವಾದ ಘೋರರೂಪವನ್ನು ವ್ಯರ್ಥವಾಗಿ ತೋರಿಸುತ್ತೇನೆ. ಆ ನನ್ನ ಘೋರ ರೂಪವನ್ನು ನಿನ್ನ ಸೊಸೆ ಸಹಿಸಿಕೊಂಡು, ನನ್ನನ್ನು ಸಂಪರ್ಕಿಸಿದರೆ ಉತ್ತಮ ಬಲವೀರ್ಯ ಗುಣಸಂಪನ್ನನಾದ ಮಗನನ್ನು ಪಡೆಯುವಳು ಎಂದು ಆಶ್ವಾಸನೆ ಯಿತ್ತರು. ಆದರೆ ಅಂಬಿಕೆ ಅವರ ರೂಪವನ್ನು ನೋಡಿ ಭಯದಿಂದ ಕಣ್ಣು ಮುಚ್ಚಿಕೊಂಡಳು. ಈ ದೋಷದಿಂದ ಆಕೆಯಲ್ಲಿ ಅಂಧನಾದ ಧೃತರಾಷ್ಟ್ರನು ಜನಿಸಿದನು. ಆಗ ಸತ್ಯವತಿಯು ನಿರ್ದೋಷನಾದ ಪುತ್ರನನ್ನು ಬೇರೆ ಸೊಸೆಯಾದ ಅಂಬಾಲಿಕೆಯಲ್ಲಿ ಉತ್ಪಾದಿಸಲು ಕೇಳಿ ಕೊಂಡು, ಆಕೆಯನ್ನು ವ್ಯಾಸರ ಬಳಿ ಕಳುಹಿಸುತ್ತಾಳೆ. ಆದರೆ ಆಕೆ ಘೋರರೂಪವನ್ನು ಕಂಡು ಭಯದಿಂದ ಕಣ್ಣುಮುಚ್ಚದಿದ್ದರೂ ಬಿಳಚಿಕೊಂಡಳು. ಬಿಳಿ ಬಣ್ಣವನ್ನು ಹೊಂದಿದಳು. ಈ ದೋಷದಿಂದ ಆಕೆಯಲ್ಲಿ ಜನಿಸಿದ ಪುತ್ರನು ಬಿಳಿ ಬಣ್ಣದವನಾಗಿ ''ಪಾಂಡು'' ಎಂದು ಖ್ಯಾತನಾಮನಾದನು. ಹೀಗೆ ವ್ಯಾಸರು ಕೌರವ - ಪಾಂಡವರ ಪಿತೃಗಳಾದ ಧೃತರಾಷ್ಟ್ರ -

ಪಾಂಡುರಾಜರ ಸ್ರಷ್ಟಾರರಾಗಿ ಮಹಾಭಾರತದ ಘಟನಾವಳಿಗೆ ಮೂಲಪುರುಷರಾದರು. ಈ ಕಾರ್ಯದಿಂದ ಮಹಾಭಾರತರೂಪ ಇತಿಹಾಸ ಕೃತಿಗೆ ತಾವೇಹಿನ್ನೆಲೆಯನ್ನು ನಿರ್ಮಿಸಿಕೊಂಡರು ಎಂಬ ಭಾವವನ್ನು ''ದೇವಸ್ಯ ಸವಿತುಃ'' ಎಂಬ ವಚನವು ಸೂಚಿಸುತ್ತದೆ. ಒಟ್ಟಿನಲ್ಲಿ ''ದೇವಸ್ಯ ಸವಿತುಃ'' ಎಂಬ ವಚನವು ಮಹಾಭಾರತದಲ್ಲಿ ವ್ಯಾಸರ ಪ್ರಮುಖ ಪಾತ್ರವನ್ನು ಸೂಚಿಸುತ್ತದೆ.

''ದೇವಸ್ಯ ಸವಿತುಃ'' ಎಂಬ ವಚನವು ವ್ಯಾಸರ ಇನ್ನೊಂದು ಮುಖದ ಮಹಿಮೆಯ ಮೇಲೂ ಬೆಳಕನ್ನು ಚೆಲ್ಲುತ್ತದೆ.

ಹಿಂದೆ ತಿಳಿಸಿರುವಂತೆ ದೇವ ಶಬ್ದಾರ್ಥ ''ರಾಜ'' ಎಂದು. ಏವಂಚ ''ದೇವಸ್ಯ ಸವಿತುಃ'' ಎಂಬ ವಚನವು ''ರಾಜನಸೃಷ್ಟಿಕರ್ತಾ'' ಎಂಬರ್ಥವನ್ನೇ ಸೂಚಿಸುತ್ತದೆ. ಆದರೆ ಇಲ್ಲಿ ಭಾವಾರ್ಥವು ಬೇರೆ. ಕೃಮಿ ರೂಪದಲ್ಲಿರುವ ತನ್ನ ಭಕ್ತನನ್ನು ಅದೇ ದೇಹದಲ್ಲಿ ರಾಜನನ್ನಾಗಿ ಮಾಡಿದ ವ್ಯಾಸರು ಸರ್ವರಾಜ ವಂದಿತ ರಾಜನನ್ನಾಗಿಯೇ ಕೃಮಿಯನ್ನು ರೂಪಿಸಿದರು. ಈ ಅದ್ಭುತ ಮಹಿಮೆಯನ್ನೇ ''ದೇವಸ್ಯ ಸವಿತುಃ'' ಎಂಬ ಭಾಗವು ಸೂಚಿಸಿದೆ.

ಈ ವಿಷಯವನ್ನು

''ಅತ್ಯಕ್ತದೇಹಂ ನೃಪತಿಂ ಚಕಾರ ಪುರಾ ಸ್ವಭಕ್ತಂ ವೃಷಲಂ ಸುಲುಬ್ಧಂ'' ಎಂಬವಚನದಿಂದ ಮಧ್ವರು ಸ್ಪಷ್ಟವಾಗಿ ಸಾರಿದ್ದಾರೆ.

''ದೇವಸ್ಯ ಸವಿತುಃ'' ಎಂಬ ವಚನವು ಇನ್ನೊಂದು ಮುಖದ ಮಹಿಮೆಯನ್ನೂ ಸೂಚಿಸುತ್ತದೆ.

ದೇವ ಶಬ್ದಕ್ಕೆ ''ಸಾತ್ತ್ವಿಕ ಮನೋನಿಯಾಮಕ ರುದ್ರ ದೇವರು'' ಎಂದರ್ಥ. ''ಭೀಮೋ ಹಿ ದೇವಃ'' ಎಂಬ ಭಾಗವತ ವಚನ ಹಾಗೂ '' ಸಾತ್ತ್ವಿಕ ಮನೋವಿವಕ್ಷಯಾ ''ದೇವ ಶಬ್ದಃ'' ಎಂಬ ಭಾಗವತ ತಾತ್ಪರ್ಯದ ವಿವರಣೆಯು ಈ ಅರ್ಥವನ್ನು ಪುಷ್ಟೀಕರಿಸಿದೆ. ಶ್ರೀ ವ್ಯಾಸರು ಮಹಾಭಾಗವತ ಪುರಾಣಾದಿಗಳ ಪ್ರವರ್ತಕರಾದ ರುದ್ರ ಸ್ವರೂಪರಾದ ಶುಕರ ಜನಕರಾಗಿ ''ದೇವಸ್ಯ ಸವಿತುಃ'' ಎಂಬ ವಚನದಿಂದ ಉಲ್ಲೇಖಿಸಲ್ಪಟ್ಟಿದ್ದಾರೆ. ''ಅಹಂಕಾರಾತ್ಮಕೋರುದ್ರಃ ಶುಕೋ ದ್ವೈಪಾಯನಾತ್ಮಜಃ'' ಎಂಬ ಪ್ರಮಾಣವು ಅಹಂಕಾರ ತತ್ತ್ವ ಅಭಿಮಾನಿಯಾದ ರುದ್ರ ದೇವರು ಶುಕರೂಪದಿಂದ ವ್ಯಾಸರಿಂದ ಜನ್ಮವನ್ನು ಪಡೆದರು ಎಂದು ಸ್ಪಷ್ಟ ಪಡಿಸಿದೆ.

ಅಥವಾ ''ದೇವಸ್ಯ ಸವಿತುಃ'' ಎಂಬ ಮಾತು ಇನ್ನೊಂದು ಮುಖದಿಂದ ಮಹಾಭಾರತದಲ್ಲಿ ವ್ಯಾಸರ ಪ್ರಮುಖಪಾತ್ರವನ್ನು ಸೂಚಿಸುತ್ತದೆ.

ದುರ್ಯೋಧನ, ದುಃಶಾಸನ ಮುಂತಾದ ದೈತ್ಯರು ''ದೀನರು''. ಅರ್ಥಾತ್ ಸಕಲ ಸದ್ಗುಣ ಗಳಿಂದ ಶೂನ್ಯರು. ಆದುದರಿಂದ ಇಂಥದೈತ್ಯರೂ ಕೂಡಾ ಈ ಅರ್ಥದಲ್ಲಿ ''ದೇವ'' ಎಂದು ಶಾಸ್ತ್ರಗಳಲ್ಲಿ ಖ್ಯಾತಿಯನ್ನು ಪಡೆದಿದ್ದಾರೆ. ''ದೀನತ್ವಾದ್ದೇವನಾಮಾನೋ ದೈತ್ಯಾಃ'' ಎಂಬ ಆಚಾರ್ಯರ ಉಕ್ತಿಯು ಈ ವಿಷಯವನ್ನು ಸ್ಪಷ್ಟಪಡಿಸಿದೆ.

ದೀನರಾಗಿ ''ದೇವ'' ವೆನಿಸಿ ಕೊಂಡ ದುರ್ಯೋಧನಾದಿಗಳ ಸೃಷ್ಟಿಗೆ ಕಾರಣರಾದುದರಿಂದ ವ್ಯಾಸರಿಗೆ ''ದೇವಸ್ಯ ಸವಿತುಃ'' ಎಂಬ ಮಾತು ಚೆನ್ನಾಗಿ ಅನ್ವಯಿಸುತ್ತದೆ.

ಕುಂತಿಗೆ ಧರ್ಮರಾಜನು ಪುತ್ರನಾಗಿ ಜನಿಸಿದಾಗ ಅಸೊಯೆಯಿಂದ ಗಾಂಧಾರಿಯು ಉದರವನ್ನು ಹೊಡೆದುಕೊಂಡು ಗರ್ಭಪಾತ ಮಾಡಿಕೊಂಡಳು. ಆ ಗರ್ಭ ಪಿಂಡವನ್ನು 101 ವಿಭಾಗಮಾಡಿ ವ್ಯಾಸರು ದೇವ ಕಾರ್ಯದ ಸಿದ್ಧಿಗಾಗಿ ತುಪ್ಪದ ಕೊಡದಲ್ಲಿ ಸಂರಕ್ಷಣೆ ಮಾಡಿದರು. ಕಾಲಕ್ರಮೇಣ ಆ ಘಟದಲ್ಲಿ ನಿರ್ಮಾಣಗೊಂಡ ಶರೀರವನ್ನು ಧರಿಸಿ ದುರ್ಯೋಧನಾದಿ ದೈತ್ಯರು ಜನಿಸಿದರು. ದೀನ ದುರ್ಯೋಧನಾದಿ ಗಳ ಜನನ ವಿಷಯದಲ್ಲಿ ಪ್ರಮುಖ ಪಾತ್ರವನ್ನು ವಹಿಸಿ ಮಹಾಭಾರತದ ಘಟನಾವಳಿಗೆ ಇನ್ನೊಂದು ಮುಖದಿಂದಲೂ ಮಹತ್ತ್ವಪೂರ್ಣವಾದ ಪಾತ್ರವನ್ನು ವಹಿಸಿದ ವ್ಯಾಸರನ್ನು ''ದೇವಸ್ಯ ಸವಿತುಃ'' ಎಂಬ ವಚನವು ಸೂಚಿಸುತ್ತದೆ.

ಅಥವಾ ''ದೇವಸ್ಯ ಸವಿತುಃ'' ಎಂಬ ವಚನವು ಇನ್ನೊಂದು ಭಾವವನ್ನೂ ವ್ಯಕ್ತಪಡಿಸುತ್ತದೆ.

ವ್ಯಾಸರು ಬ್ರಹ್ಮರುದ್ರಾದಿ ದೇವತೆಗಳ ಮೇಲೂ ಜ್ಞಾನರಶ್ಮಿಯನ್ನು ಚೆಲ್ಲುವ ''ಜ್ಞಾನಸೂರ್ಯ''ರು. ಈ ಕಾರಣದಿಂದಲೇ ಶ್ರೀ ವಾಸಿಷ್ಠ ಕೃಷ್ಣರು (ವೇದವ್ಯಾಸರು) ''ಗೀರ್ವಾಣ ವಿಜ್ಞಾನದ ಮಾನತೋಸ್ಮಿ'' ಎಂದು ವ್ಯಾಸ ಮಂತ್ರದ ಧ್ಯಾನ ಶ್ಲೋಕದಲ್ಲಿ ವಂದಿತರಾಗಿದ್ದಾರೆ.

ಶ್ರೀ ಮಧ್ವರು ವ್ಯಾಸರನ್ನು ಜಗತ್ತಿನಲ್ಲಿ ವ್ಯಾಪಿಸಿದ ಅಜ್ಞಾನ ಕತ್ತಲೆಯನ್ನು ದೂರಕ್ಕೆ ಅಟ್ಟಿದ ''ವಿಜ್ಞಾನ ಮಹಾದಿವಾಕರ'' ಎಂದೇ ವರ್ಣಿಸಿದ್ದಾರೆ.

''ದೇವೌ ವಿಷ್ಣುಶ್ಚ ವಾಯುಶ್ಚ ಸರ್ವಜ್ಞತ್ವಾತ್ ಪ್ರಕೀರ್ತಿತೌ''

ಎಂಬ ಪ್ರಮಾಣ ವಚನವು ಸ್ಪಷ್ಟಪಡಿಸಿರುವಂತೆ ''ದೇವ'' ಶಬ್ದವು ''ಸರ್ವಜ್ಞ'' ಎಂಬ ಅರ್ಥದಲ್ಲಿ ವಾಯುದೇವರನ್ನೂ ಸೂಚಿಸುತ್ತದೆ. ಶುಕರಲ್ಲಿ ಸನ್ನಿಹಿತರಾದ ವಾಯುದೇವರಿಗೆ ಭಾಗವತಾದಿ ಜ್ಞಾನ ಬೆಳಕನ್ನು ನೀಡಿದ ವ್ಯಾಸರು ವಾಯು ಸ್ವರೂಪರಾದ ಶ್ರೀ ಮಧ್ವರಿಗೂ ತನ್ನ ಆಶ್ರಮದಲ್ಲಿ ವೇದ ಪುರಾಣ ಮಹಾಭಾರತ

ಪಂಚರಾತ್ರಾದಿ ಸಕಲ ಸಚ್ಛಾಸ್ತ್ರ ಜ್ಞಾನದ ಬೆಳಕನ್ನು ಪ್ರದಾನ ಮಾಡಿದರೆಂದು ಸುಮಧ್ವ ವಿಜಯದಲ್ಲಿ ಉಲ್ಲೇಖವಿದೆ. ಆದುದರಿಂದ ''ದೇವಸ್ಯ ಸವಿತುಃ'' ಎಂಬ ಮಾತು ವ್ಯಾಸರು, ಸರ್ವಜ್ಞರಾದ ವಾಯು ಹಾಗೂ ವಾಯು ಸ್ವರೂಪ ಮಧ್ವರಿಗೂ ಜ್ಞಾನದ ಬೆಳಕನ್ನು ಪ್ರದಾನಮಾಡಿದ ''ಮಹಾಜ್ಞಾನ ಸೂರ್ಯ'' ಎಂಬ ಭಾವವನ್ನು ಸೂಚಿಸುತ್ತದೆ.

ವ್ಯಾಸರು ಮಹಾಭಾರತಾದಿಗಳ ನಿರ್ಮಾಣದಿಂದಲೂ ತೃಪ್ತರಾಗದೆ ಮುಂದೇನು ಮಾಡಬೇಕೆಂದು ಅರಿಯದೆ ಕಿಂಕರ್ತವ್ಯತಾಮೂಢರಾದರು. ಆಗ ಆಗಮಿಸಿದ ನಾರದರನ್ನು ತನ್ನ ಅತೃಪ್ತಿಗೆ ಕಾರಣವೇನು? ಎಂದು ಪ್ರಶ್ನಿಸಿದರು. ಆಗ ನಾರದರು ಅವರ ಅತೃಪ್ತಿಗೆ ಕಾರಣವನ್ನು ತಿಳಿಸಿ ಮಹಾಭಾಗವತದ ರಚನೆಯಿಂದ ತೃಪ್ತಿಸಿಗುತ್ತದೆ ಎಂದು ಸೂಚಿಸಿದರು. ಈ ರೀತಿಯಾಗಿ ಉಲ್ಲೇಖ ಭಾಗವತದಲ್ಲಿ ಇದೆ. ಈ ಉಲ್ಲೇಖವು ವ್ಯಾಸರಿಗೆ ಅಜ್ಞಾನಾದಿ ದೋಷಗಳು ಇವೆ ಎಂಬ ಭ್ರಾಂತಿಯನ್ನುಂಟು ಮಾಡುತ್ತದೆ. ಬೇರೆಯವರಿಂದ ಸಲಹೆ ಪಡೆದ ವ್ಯಾಸರು ಹೇಗೆ ತಾನೆ ಸರ್ವಜ್ಞರು`ಎಂಬ ಪ್ರಶ್ನೆಯೂ ಇಲ್ಲಿ ಏಳುತ್ತದೆ. ಈ ಭ್ರಾಂತಿ - ಪ್ರಶ್ನೆಗಳನ್ನು ನಿವಾರಿಸುವುದಕ್ಕಾಗಿಯೇ ಗಾಯತ್ರಿ ಮಂತ್ರವು ಅವರನ್ನು ''ದೇವಸ್ಯ'' ಎಂಬ ಪದದಿಂದ ಉಲ್ಲೇಖ ಮಾಡಿದೆ. ''ದೇವಸ್ಯ'' ಎಂಬ ಪದವು ಹಿಂದೆ ಸಪ್ರಮಾಣವಾಗಿ ತಿಳಿಸಿರುವಂತೆ ''ಸರ್ವಜ್ಞ'' ಎಂಬರ್ಥವನ್ನು ನೀಡುತ್ತದೆ. ಏವಂಚ ದೇವಸ್ಯ ಎಂಬ ಪದದಿಂದ ವ್ಯಾಸರನ್ನು ವರ್ಣಿಸಿದ ಗಾಯತ್ರಿ ಮಂತ್ರವು, ಸರ್ವವನ್ನೂ ಅರಿತಿರುವ ಅವರಿಗೆ ಭ್ರಾಂತಿ-ಅಜ್ಞಾನಗಳಿಲ್ಲವೆಂದು ಸೂಚಿಸುತ್ತದೆ. ವ್ಯಾಸರು ದೈತ್ಯ ಮೋಹನಾರ್ಥ ಅಜ್ಞಾನವನ್ನು ಪ್ರದರ್ಶನ ಮಾತ್ರ ಮಾಡಿದರೆಂದು ತಿಳಿಯಬೇಕು.

ವ್ಯಾಸರು ಬೇರೆಯವರಿಂದ ಉಪದೇಶವನ್ನು ಪಡೆದು ಸರ್ವಜ್ಞರಾಗಿಲ್ಲ. ಸ್ವತಃ ಸರ್ವಜ್ಞರು. ತನ್ನ ಅಪಾರ ಬುದ್ಧಿಯಲ್ಲಿ ಎಲ್ಲಾ ವಿಷಯಗಳನ್ನು ಯಾರ ಅನುಗ್ರಹವಿಲ್ಲದೆ ನಿತ್ಯದಲ್ಲೂ ತುಂಬಿಸಿಕೊಂಡವರು. ಸ್ವತಃ ಜ್ಞಾನಪ್ರಕಾಶ ಸ್ವರೂಪ ರಾದುದರಿಂದಲೇ ಅವರನ್ನು ಗಾಯತ್ರಿ ಮಂತ್ರವು ''ಸವಿತುಃ'' ಎಂಬುದಾಗಿ ವರ್ಣಿಸಿದೆ.

ಸವಿತೃ ಶಬ್ದವು ಸೂರ್ಯವಾಚಕ. ಹೇಗೆ ಸೂರ್ಯನು ಉದಯಿಸುವಾಗಲೇ ಮಹಾರಶ್ಮಿ ರೂಪನಾಗಿಯೇ ಪ್ರಾದುರ್ಭವಿಸುತ್ತಾನೋ ಅದೇ ರೀತಿ ಭಗವಾನ್ ವ್ಯಾಸರು ಪಾದುರ್ಭವಿಸುವಾಗಲೇ ಮಹಾ ಜ್ಞಾನರಶ್ಮಿ ಸ್ವರೂಪರಾಗಿಯೇ ಜ್ಞಾನಿಗಳಿಗೆ ವ್ಯಕ್ತರಾಗಿದ್ದಾರೆ. ಆದುದರಿಂದ ಪ್ರಾದುರ್ಭವಿಸಿದ ಕಾಲದಲ್ಲಿ ಅವರಲ್ಲಿ ಜ್ಞಾನರಶ್ಮಿ ಇರಲಿಲ್ಲ. ನಂತರ ಉಪದೇಶದಿಂದ ಪ್ರಾಪ್ತವಾಯಿತು ಎಂದು ಭ್ರಮಿಸಬಾರದು.

ಪ್ರಾದುರ್ಭವಿಸು ವಾಗಲೇ ಮಹಾಜ್ಞಾನ ರಶ್ಮಿ ಸ್ವರೂಪರಾಗದಿದ್ದರೆ ವ್ಯಾಸರಿಗೆ ಸೂರ್ಯನ ಹೋಲಿಕೆ ಹೇಗೆ ಸಮರ್ಪಕವೆನಿಸುತ್ತದೆ ?

ಶ್ರೀ ವೇದವ್ಯಾಸರು ''ಯಃಕಶ್ಚಿತ್ ಋಷಿ'' ಎಂದು ಕೆಲವರು ತಪ್ಪಾಗಿ ಭಾವಿಸುತ್ತಾರೆ. ಆ ತಪ್ಪು ಭಾವನೆಯನ್ನು ಹೋಗಲಾಡಿಸಲು ಶ್ರೀ ಗಾಯತ್ರಿ ಮಂತ್ರವು ಅವರನ್ನು ''ದೇವಸ್ಯ'' ಎಂದು ಹೆಸರಿಸಿದೆ. ಅವರು ''ದೇವ''ರು. ಸಾಮಾನ್ಯ ಋಷಿಯಲ್ಲ ವೆಂದು ಗಾಯತ್ರಿಯ ಭಾವವಾಗಿದೆ. ಮುಕ್ತಿಯಲ್ಲಿ ಸರ್ವ ಮುಕ್ತರಿಂದಲೂ ಪ್ರಾಪ್ಯನಾದ ಭಗವಂತನೇ ''ದೇವ'' ಎಂದು ಶಾಸ್ತ್ರದಲ್ಲಿ ಖ್ಯಾತನಾಗಿದ್ದಾನೆ. ಈ ಅರ್ಥವನ್ನು ''ದೇವಃ ಸ ಸರ್ವ ಜೀವಾನಾಂ ಗಮ್ಯತ್ವಾತ್ ಸಮುದೀರಿತಃ'' ಎಂಬ ಪ್ರಮಾಣದ ಉಲ್ಲೇಖದಿಂದ ಆಚಾರ್ಯಮಧ್ವರು ಸ್ಪಷ್ಟಪಡಿಸಿದ್ದಾರೆ. ಅಂಥ ಭಗವಂತನ ಸಾಕ್ಷಾತ್ ಸ್ವರೂಪ ರಾದುದರಿಂದ ವ್ಯಾಸರಿಗೂ ಈ ಶಬ್ದವು ಅನ್ವಯಿಸುತ್ತದೆ. ಏವಂಚ ''ದೇವಸ್ಯ'' ಎಂಬ ಪದವು ಮುಕ್ತರಿಂದಲೂ ಪ್ರಾಪ್ಯನಾದ ಭಗವಂತನೇ ವ್ಯಾಸರು ಎಂಬುದನ್ನು ಸ್ಪಷ್ಟಪಡಿಸಿ ಸಾಮಾನ್ಯ ಋಷಿ ಎಂಬ ಭ್ರಮೆಯನ್ನು ಹೋಗಲಾಡಿಸಿದೆ.

ವ್ಯಾಸರಲ್ಲಿ ಪ್ರಯೋಗಿಸಿದ ''ದೇವಸ್ಯ'' ಎಂಬ ಪದವು ಇನ್ನೊಂದು ಭಾವವನ್ನೂ ಸೂಚಿಸುತ್ತದೆ.

ಮಹಾಯಶೋವಂತರಾದ ವ್ಯಾಸರು, ವೇದಾರ್ಥವನ್ನು ಖಚಿತವಾಗಿ ತಿಳಿಯಲು ಅನುಕೂಲವಾದ ಬ್ರಹ್ಮಸೂತ್ರಗಳನ್ನು ರಚಿಸಿ, ಬ್ರಹ್ಮರುದ್ರಾದಿ ದೇವತೆಗಳಲ್ಲಿ ಋಷಿಗಂಧರ್ವರಲ್ಲಿ ಹಾಗೂ ಶ್ರೇಷ್ಠ ಚಕ್ರವರ್ತಿ - ಮನುಷ್ಯೋತ್ತಮರಲ್ಲಿ ಉತ್ತಮ ಜ್ಞಾನವನ್ನು ಸ್ಥಾಪನೆಮಾಡಿ ಮೇರುಪರ್ವತ ಹಾಗೂ ಉತ್ತರ ಬದರಿಯಲ್ಲಿ ಇಂದಿಗೂ ಕ್ರೀಡಿಸುತ್ತಾ ವಿರಾಜಮಾನ ರಾಗಿದ್ದಾರೆಂದು ಆಚಾರ್ಯ ಮಧ್ವರು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಸ್ಪಷ್ಟ ಪಡಿಸಿದ್ದಾರೆ.

ಈ ರೀತಿಯಾಗಿ ಜ್ಞಾನ ಮಹಾಕಾರ್ಯವನ್ನು ಮಾಡಿ ವ್ಯಾಸರು ಮೇರು ಪರ್ವತ - ಬದರಿಯಲ್ಲಿ ಇಂದಿಗೂ ಕ್ರೀಡಿಸುತ್ತಿರುವುದರಿಂದಲೇ ''ಕ್ರೀಡಾಕರ್ತ'' ಎಂಬರ್ಥವನ್ನು ಹೇಳುವ ''ದೇವ'' ಶಬ್ದದಿಂದ ಗಾಯತ್ರೀ ಮಂತ್ರವು ವ್ಯಾಸರ ವ್ಯಕ್ತಿತ್ವದಬಗ್ಗೆ ಬೆಳಕನ್ನು ಚೆಲ್ಲಿದೆ.

''ಧಿಯೋ ಯೋನಃ ಪ್ರಚೋದಯಾತ್'' ಎಂಬ ವಚನವು ಶ್ರೀ ವ್ಯಾಸರು ಮಹಾ ಭಾರತಾದಿ ಗ್ರಂಥಗಳ ನಿರ್ಮಾಣದಿಂದ ಜ್ಞಾನಪ್ರಚೋದನೆಯನ್ನು ಮಾತ್ರ ಮಾಡಿದವರಲ್ಲ. ಲೋಕ ಕಲ್ಯಾಣಕ್ಕಾಗಿ, ಚಿಂತನ ಶೀಲರಾದ ಮಧ್ವ, ಪೈಲ, ವೈಶಂಪಾಯನ, ಜೈಮಿನಿ, ಸುಮಂತು, ರೋಮಹರ್ಷಣ, ಶುಕ ಮುಂತಾದ ಜ್ಞಾನಿ ಶ್ರೇಷ್ಠರಾದ ಗುರುಗಳನ್ನೂ ಜ್ಞಾನ ಕಾರ್ಯದಲ್ಲಿ ಪ್ರೇರಣೆ ಮಾಡಿದವರು ಎಂಬ ಭಾವವನ್ನು ಸ್ಪಷ್ಟ ಪಡಿಸುತ್ತದೆ.

ಹರಿಯ ಸರ್ವೋತ್ತಮತ್ವವನ್ನು ಸಾರುವ ವೇದಗಳನ್ನು ಪ್ರಕೃಷ್ಟವಾಗಿ ಬಹುಕಾಲದ ವರೆಗೆ ಮಥನ (ಚಿಂತನ) ಮಾಡುವವರು ಶ್ರೀವಾಯುಸ್ವರೂಪರಾದ ಮಧ್ವರು. ಈ

ವಿಚಾರವನ್ನು ''ಗುಹಾಸಂತಂ ಮಾತರಿಶ್ವಾ ಮಥಾಯತಿ'' ಎಂಬ ವೇದ ವಚನವೇ ಸ್ಪಷ್ಟ ಪಡಿಸಿದೆ. ವಾಯುರೂಪ ಮಧ್ವರು ವಿಶಿಷ್ಟ ಚಿಂತನ ಶೀಲರಾದುದರಿಂದಲೇ ''ಧ್ಯಾಯತೇ ಇತಿ ಧೀಃ' ಎಂಬ ವ್ಯುತ್ಪತ್ತಿಗನುಸಾರವಾಗಿ ''ಧೀ'' ಶಬ್ದದಿಂದ ಪ್ರತಿಪಾದ್ಯರಾಗಿದ್ದಾರೆ. ಅಥವಾ ಬುದ್ಧಿಗೆ ಅಭಿಮಾನಿ (ನಿಯಾಮಕ) ರಾದುದರಿಂದಲೂ ಅವರಿಗೆ ''ಧೀ'' ಶಬ್ದವು ಸಮರ್ಪಕವೆನಿಸುತ್ತದೆ. ಪೈಲ, ಜೈಮಿನಿ ಮುಂತಾದ ವ್ಯಾಸ ಶಿಷ್ಯರು ಯಥಾಯೋಗ್ಯವಾಗಿ ಚಿಂತನ ಶೀಲರಾದುದರಿಂದ ಅವರಿಗೂ ಹಿಂದೆ ಹೇಳಿದ ವ್ಯುತ್ಪತ್ತಿ ಗನುಸಾರವಾಗಿ ಈ ಶಬ್ದವು ಅನ್ವಯಿಸುತ್ತದೆ. ವಾಯುದೇವರ ಪ್ರಥಮಾವತಾರವಾದ ಹನುಮಂತನನ್ನು ವೇದವು ''ಸಾಧತೇಮತಿಃ'' ಎನ್ನುವ ವಚನದಲ್ಲಿ ಮಹಾಬುದ್ಧಿವಂತ ಎನ್ನುವ ಅರ್ಥದಲ್ಲಿ ''ಧೀ'' ಶಬ್ದದ ಪರ್ಯಾಯವಾದ ''ಮತಿ'' ಶಬ್ದದಿಂದಲೇ ಉಲ್ಲೇಖಿಸಿದೆ. ಆದುದರಿಂದ ತೃತೀಯಾವತಾರವಾದ ಮಧ್ವರೂಪಕ್ಕೂ ಈ ಅರ್ಥವಲ್ಲಿ ಧೀಶಬ್ದವು ಸಮರ್ಪಕನಿಸುತ್ತದೆ.

ಮಹಾಬುದ್ಧಿವಂತರೂ, ವಿಶಿಷ್ಟ ಚಿಂತನಲ ಶೀಲರೂ ಹಾಗೂ ಬುದ್ಧಿಗೆ ನಿಯಾಮಕರೂ ಆದ ವಾಯುಸ್ವರೂಪರಾದ ಬೇರೆ ಬೇರೆ ಮಧ್ವರನ್ನು ಪ್ರತಿಯೊಂದು ಕಲ್ಪದಲ್ಲಿ 28 ನೇ ಕಲಿಯುಗದಲ್ಲಿ ಜ್ಞಾನಕಾರ್ಯದಲ್ಲಿ ವ್ಯಾಸರು ಪ್ರೇರಿಸುತ್ತಾರೆ.

ಇದನ್ನೇ ನಾರಾಯಣ ಪಂಡಿತಾಚಾರ್ಯರು ''ಪಾರಾಶರ್ಯಃ ಪರತತ್ತ್ವ ಪ್ರಸಿದ್ಧ್ಯೈ ತಾತ್ಪರ್ಯಾರ್ಥಂ ಪರಮಂ ಭಾರತಸ್ಯ'' । . . . . .

ವ್ಯಕ್ತುಂ ವಕ್ತುಂ ನಿಯುನಕ್ತಿ ಸ್ಮ ಸಾಕ್ಷಾದೇನಂ ಧನ್ಯಂ ಭುವನೇ ಮನ್ಯಮಾನಃ ॥ ಎಂಬ ಸುಮಧ್ವ ವಿಜಯ ಶ್ಲೋಕದಲ್ಲಿ ಸ್ಪಷ್ಟ ಪಡಿಸಿದ್ದಾರೆ.

ವ್ಯಾಸರು ಧೀಶಬ್ದ ವಾಚ್ಯರಾದ ಮಧ್ವರನ್ನು ಮಾತ್ರ ಕಲಿಯುಗದಲ್ಲಿ ಮಹಾ ಭಾರತ ತಾತ್ಪರ್ಯ ನಿರ್ಣಯ ಮುಂತಾದ ಕೃತಿ ನಿರ್ಮಾಣ ರೂಪ ಜ್ಞಾನ ಕಾರ್ಯಗಳಲ್ಲಿ ಪ್ರೇರಿಸಲಿಲ್ಲ. ಹಿಂದೆ ತಿಳಿಸಿರುವಂತೆ ವಿಶಿಷ್ಟ ಚಿಂತನ ಶೀಲರಾದ ಜೈಮಿನಿ ಮುಂತಾದ ಶಿಷ್ಯರನ್ನು, ಕರ್ಮ ಮೀಮಾಂಸಾ ಶಾಸ್ತ್ರಾದಿ ನಿರ್ಮಾಣ ಹಾಗೂ ವೇದಾದಿ ಪ್ರಸಾರ ಕಾರ್ಯಗಳಲ್ಲಿ ವ್ಯಾಸರು ದ್ವಾಪರಯುಗದಲ್ಲು ಪ್ರೇರಿಸಿದ್ದಾರೆ.

ಆದುದರಿಂದ ''ಧಿಯೋಯೋನಃ ಪ್ರಚೋದಯಾತ್'' ಎಂಬ ಗಾಯತ್ರಿ ಮಂತ್ರದ ಭಾಗವು ವ್ಯಾಸರು, ಮಧ್ವ, ಶುಕ, ಜೈಮಿನಿ ಮುಂತಾದ ವಿಶಿಷ್ಟ ಚಿಂತನಶೀಲರಾದ ಹಲವಾರು ತನ್ನ ಶಿಷ್ಯೋತ್ತಮರನ್ನೂ ಲೋಕ ಹಿತಕ್ಕಾಗಿ ಜ್ಞಾನಕಾರ್ಯಗಳಲ್ಲಿ ಪ್ರೇರಿಸಿದರು. ಎಂದು ವ್ಯಾಸರು ಲೋಕಕ್ಕೆ ಮಾಡಿದ ಪರಮಾನುಗ್ರಹವನ್ನು ಸ್ಪಷ್ಟಪಡಿಸುತ್ತದೆ.

ಪವಂಜ ''ಧಿಯೋಯೋನಃ ಪ್ರಚೋದಯಾತ್'' ಎಂಬ ಭಾಗದ ಅನ್ವಯಾರ್ಥವನ್ನು ಹೀಗೆ ಸ್ವೀಕರಿಸಬೇಕು.

ಯಃ = ಪ್ರಕಟಿತ ಜ್ಞಾನ ಸ್ವರೂಪರಾದ ವ್ಯಾಸರು ನಃ = ನಮಗೋಸ್ಕರ ಧಿಯಃ = ವಿಶಿಷ್ಟ ಚಿಂತನ ಶೀಲರಾದ ಮಧ್ವ - ಶುಕ ಮುಂತಾದ ಜ್ಞಾನಿವರೇಣ್ಯರನ್ನು ಪ್ರಚೋದಯಾತ್ ಪ್ರಕೃಷ್ಟವಾದ ಜ್ಞಾನಕಾರ್ಯದಲ್ಲಿ ಪ್ರೇರಿಸುತ್ತಾರೆ. ಎಂದು

## 4. ತತ್

ಶ್ರೀ ವೇದವ್ಯಾಸರಿಗೆ ''ವಿಶಿಷ್ಟ ಹಾಗು ಸರ್ವತ್ರ ವ್ಯಾಪ್ತರು'' ಎನ್ನುವ ಅರ್ಥದಲ್ಲಿ ''ವ್ಯಾಸ'' ಎಂಬ ಹೆಸರು. ಅಥವಾ ವಿಶಿಷ್ಟಾ ಆಸಾಯಸ್ಯಸಃ ಎಂಬ ವ್ಯುತ್ಪತ್ತಿಗನುಸಾರವಾಗಿ ಸರ್ವತ್ರ ವಿಶಿಷ್ಟವಾದ ಸ್ಥಿತಿಯನ್ನು ಪಡೆದ ವ್ಯಾಸರು ಈ ಶಬ್ದದಿಂದ ಪ್ರತಿಪಾದ್ಯರಾಗಿದ್ದಾರೆ. ಬ್ರಹ್ಮಾಂಡದ ಒಳ ಹೊರಗೂ ವಿಶಿಷ್ಟ ಜ್ಞಾನರಶ್ಮಿ ಜಾಲವನ್ನು ಪ್ರಸರಿಸುತ್ತಾ ವ್ಯಾಸರು ವಿರಾಜಮಾನರಾಗಿದ್ದಾರೆ. ಸರ್ವತ್ರ ವಿಜ್ಞಾನ ರಶ್ಮಿಯಿಂದ ವ್ಯಾಪ್ತರಾದುದರಿಂದಲೇ ಆಚಾರ್ಯ ಮಧ್ವರ ''ವಿಜ್ಞಾನ ರೋಚಿಃ ಪರಿಪೂರಿತಾಂತರ್ಬಾಹ್ಯಾಂಡ ಕೋಶಂ ಹರಿತೋಪಲಾಭಂ'' ಎಂಬ ಧ್ಯಾನ ಶ್ಲೋಕದಲ್ಲಿ ಈ ರೀತಿಯಾಗಿ ವರ್ಣಿತರಾಗಿದ್ದಾರೆ.

ವಿಜ್ಞಾನರಶ್ಮಿಯಿಂದ ಸರ್ವತ್ರ ವ್ಯಾಪ್ತರಾದುದರಿಂದಲೇ ಗಾಯತ್ರಿ ಮಂತ್ರವು ಅವರ ಸ್ವರೂಪವನ್ನು ''ತತ್''ಎಂಬ ಪದದಿಂದ ನಿರೂಪಿಸಿದೆ. ಸರ್ವ ಗುಣಗಳಿಂದಲೂ ವ್ಯಾಪ್ತವಾದ ಸ್ವರೂಪ ಎಂಬರ್ಥವನ್ನೂ ಇಲ್ಲಿ ''ತತ್'' ಶಬ್ದವು ಸಾರುತ್ತದೆ.

## 5. ವರೇಣ್ಯಂ

ಈ ಪದವೂ ವ್ಯಾಸರ ಸ್ವರೂಪದ ಬಗ್ಗೆ ಮತ್ತಷ್ಟೂ ಪರಿಚಯವನ್ನು ನೀಡುತ್ತದೆ. ಈ ಪದದ ಅರ್ಥ ''ಭಜನೀಯ'' ಎಂದು ಈ ಪದಕ್ಕೆ ''ದೇವಸ್ಯ'' ಎಂಬ ಪದವನ್ನು ಹೊಂದಿಸಿಕೊಳ್ಳ ಬೇಕು. ಆಗ ''ದೇವಸ್ಯ ವರೇಣ್ಯಂ'' ಎಂಬ ವಚನದಿಂದ ಬ್ರಹ್ಮಾದಿ ದೇವತೆಗಳಿಂದಲೂ ಭಜಿಸಲರ್ಹವಾದ ಸ್ವರೂಪ ಎಂಬರ್ಥವು ಸೂಚಿತವಾಗುತ್ತದೆ.

ಈ ಹಿಂದೆ ವ್ಯಾಸ ಚರಿತ್ರೆಯಲ್ಲಿ ಉಲ್ಲೇಖಿಸಿದಂತೆ ವ್ಯಾಸರನ್ನು ಭಜಿಸಲು ಬ್ರಹ್ಮಾದಿ ದೇವತೆಗಳು ವೈಶಂಪಾಯನಾದಿ ಮುನಿಗಳಲ್ಲಿ ಪ್ರವೇಶಿಸಿದ್ದಾರೆ.

ಅವರು ವ್ಯಾಸರನ್ನು ಬೆನ್ನು ಬಿಡದೆ ಹಿಂಬಾಲಿಸಿ ಮೇರುಪರ್ವತದಲ್ಲಿ ಅವರನ್ನು ಭಜಿಸಿ ಜ್ಞಾನವನ್ನು ಪಡೆದಿದ್ದಾರೆ.

ಆಚಾರ್ಯರು ಉದಾಹರಿಸಿದ ''ಸುಪರ್ಣಾ ಋಷಯೋ ವ್ಯಾಸಂ ನಾಥಮಾನಾ ಯಯುಃ ಸದಾ ।

ಭ್ರಾಂತಿಂ ನಿವಾರಯಾಸ್ಮಕಂ ಮುಮುಗ್ಧೀತಿವಾದಿನಃ ॥ ಎಂಬ ವ್ಯಾಸ ತಂತ್ರದ ವಚನವೂ ನಮ್ಮ ಭ್ರಾಂತಿಯನ್ನು ನಿವಾರಿಸು ಸಂಸಾರದಿಂದ ಬಿಡುಗಡೆಗೊಳಿಸು

ಎಂಬುದಾಗಿ ಶ್ರೇಷ್ಠ ಜ್ಞಾನಿಗಳಾದ ಸುರ ಮುನಿಗಳು ವ್ಯಾಸರನ್ನು ಭಜಿಸಿದರು ಎಂಬುದಾಗಿ ಸ್ಪಷ್ಟವಾಗಿ ಸಾರುತ್ತಿದೆ.

ಒಟ್ಟಿನಲ್ಲಿ ದೇವಸ್ಯ ವರೇಣ್ಯಂ ಎಂಬ ವಚನವು ದೇವತೆಗಳಿಂದಲೂ ಭ್ರಾಂತಿ - ಸಂಸಾರಗಳ ನಿವಾರಣೆಗಾಗಿ ಭಜನೀಯ ವಾದ ದಿವ್ಯ ಸ್ವರೂಪ ಸಂಪನ್ನರು ವ್ಯಾಸರು ಎಂದು ಸ್ಪಷ್ಟಪಡಿಸುತ್ತದೆ.

## 6. ಭರ್ಗಃ

ಈ ಶಬ್ದವು ಈ ಹಿಂದೆ ತಿಳಿಸಿದಂತೆ ವ್ಯಾಸರ ಪ್ರಕಾಶ - ಆನಂದ - ಜ್ಞಾನಸ್ವರೂಪವನ್ನು ಸ್ಪಷ್ಟಪಡಿಸುವುದಲ್ಲದೆ, ತೇಜಃ ಶಬ್ದದ ಪರ್ಯಾಯವೆನಿಸಿದ ಈ ಪದವು ಆಚಾರ್ಯರು ''ಸಹಸ್ರಲಕ್ಷಾಮಿತ ಭಾನುದೀಧಿತಿಃ'' ಎಂಬುದಾಗಿ ವರ್ಣಿಸಿರುವಂತೆ ಅಸಂಖ್ಯಾತ ಸೂರ್ಯರ ತೇಜಃ ಪುಂಜ ಸ್ವರೂಪವನ್ನೂ ವರ್ಣಿಸುತ್ತದೆ.

ಆಚಾರ್ಯರು '' ಸಹಸ್ರ ಲಕ್ಷಾಮಿತ ಭಾನುದೀಧಿತಿಃ'' ಎಂದು ವ್ಯಾಸರನ್ನು ವರ್ಣಿಸಿದ್ದಾರೆ. ಜ್ಞಾನಿಗಳ ದಿವ್ಯ ದೃಷ್ಟಿಯಲ್ಲಿ ಅಸಂಖ್ಯಾತ ಸೂರ್ಯರ ತೇಜಃ ಪುಂಜ ಸ್ವರೂಪರಾಗಿ ವ್ಯಾಸರು ಕಾಣಿಸಿಕೊಂಡಿದ್ದಾರೆ. ತೇಜ ಶಬ್ದದ ಪರ್ಯಾಯವಾದ ಭರ್ಗ ಶಬ್ದ ದಿಂದ ಈ ಭಾವವೇ ಇಲ್ಲಿ ವ್ಯಕ್ತವಾಗುತ್ತದೆ.

ಶ್ರೀ ಮಧ್ವರು ಪ್ರತಿಭೆಯೇ ಅಂತಃ ತೇಜಸ್ಸು ಎಂದು ವಿವರಿಸಿದ್ದಾರೆ. ಅಂಥ ತೇಜಸ್ಸನ್ನು ಭರ್ಗ ಶಬ್ದದಿಂದ ಸ್ವೀಕರಿಸಿದರೆ ವ್ಯಾಸರು ಅಪಾರ ಪ್ರತಿಭಾ ಸ್ವರೂಪರು ಎಂಬ ಭಾವವೂ ವ್ಯಕ್ತವಾಗುತ್ತದೆ.

''ಭರ್ಗ'' ಶಬ್ದಕ್ಕೆ ''ದೇವಸ್ಯ'' ಎಂಬ ಶಬ್ದವನ್ನು ಜೋಡಿಸಿದಾಗ ''ದೇವಸ್ಯ ಭರ್ಗಃ'' ಎಂಬ ವಚನವು ಮಹಾದೀನನಾಗಿ ''ದೇವ'' ಎನಿಸಿದ ಅಜ್ಞಾನ - ಮಿಥ್ಯಾ ಜ್ಞಾನಗಳ ಪ್ರತೀಕನಾದ ಕಲಿಯನ್ನು ಭರ್ಜನ ಮಾಡಿದ ತೇಜಃ ಸ್ವರೂಪರು ಎಂಬ ಭಾವವನ್ನು ಸ್ಪಷ್ಟಪಡಿಸುತ್ತದೆ. ದುರಿತ ಭರ್ಜನ ಶೀಲರು ಎಂಬ ಭಾವವನ್ನೂ ಈ ಶಬ್ದವು ಸೂಚಿಸುತ್ತದೆ.

## 7. ''ಧೀಮಹಿ''

ಈ ಶಬ್ದವು ಎರಡರ್ಥಗಳಲ್ಲಿ ತೆರೆದು ಕೊಳ್ಳುತ್ತದೆ. ಕ್ರಿಯಾಪದರೂಪದಲ್ಲಿ ಇದನ್ನು ಸ್ವೀಕರಿಸಿದರೆ ಧ್ಯಾನಮಾಡುತ್ತೇವೆ ಎಂಬರ್ಥವು ಲಭ್ಯವಾಗುತ್ತದೆ. ''ಧೀಮಹಿ'' ಪದವನ್ನು ''ವಿಶೇಷಣ'' ವಾಗಿ ಸ್ವೀಕರಿಸಿದರೆ ಅದು ವ್ಯಾಸರ ಧ್ಯೇಯಸ್ವರೂಪದ ಬಗ್ಗೆ ಬೆಳಕನ್ನು ಚೆಲ್ಲುತ್ತದೆ.

ಧಿಯಾ ಅತಿಶಯೇನ ಮಹ್ಯತೇ ಇತಿ ''ಧೀಮಹಿ'' ಎಂಬ ವ್ಯುತ್ಪತ್ತಿಗನುಸಾರವಾಗಿ ಧೀಶಬ್ದದಿಂದ ಉಲ್ಲೇಖಿಸಲ್ಪಟ್ಟ ಮಧ್ವರಿಂದ ಅತಿಶಯಿತವಾಗಿ ಪೂಜ್ಯವಾದ ಸ್ವರೂಪರು ಎಂಬ ಭಾವವು ಸ್ಪಷ್ಟವಾಗುತ್ತದೆ.

ಶ್ರೀ ಮಧ್ವರು ಸೂತ್ರ ಭಾಷ್ಯಾದಿ ನಿರ್ಮಾಣ ರೂಪ ವಿಶೇಷ ಜ್ಞಾನಕಾರ್ಯದಿಂದ ವೇದವ್ಯಾಸ ದೇವರನ್ನು ವಿಶೇಷವಾಗಿ ಪೂಜಿಸಿದ್ದಾರೆ. ಪ್ರೀತಿಪಡಿಸಿದ್ದಾರೆ. ಈ ನಿಮಿತ್ತ ವ್ಯಾಸರ ಸ್ವರೂಪವು ''ಧೀಮಹಿ'' ವೆನಿಸಿದೆ.

ಇಲ್ಲಿ ಧಿಯಾ ಮಹ್ಯತೇ ಇತಿ ''ಧೀಮಹ'' ಎಂದು ಅಕಾರಾಂತವಾಗುವ ಬದಲು ''ಧೀಮಹಿ'' ಎಂದು ಇಕಾರಾಂತವಾಗಿದೆ. ಈ ಇಕಾರವು ವ್ಯಾಸ ಸ್ವರೂಪದಲ್ಲಿ ಪೂಜ್ಯತಾತಿಶಯವನ್ನು ಸೂಚಿಸುತ್ತದೆ. ಒಟ್ಟಿನಲ್ಲಿ ವಿಶಿಷ್ಟ ಚಿಂತನಶೀಲರಾಗಿ ''ಧೀ'' ಶಬ್ದದಿಂದ ವಾಚ್ಯರಾದ ಮಧ್ವ ಶುಕ, ವೈಶಂಪಾಯನ ಮುಂತಾದ ಶ್ರೇಷ್ಠ ಜ್ಞಾನಿಗಳಿಂದ ಅತಿಶಯವಾಗಿ ಪೂಜ್ಯವಾದ ಸ್ವರೂಪವು ವ್ಯಾಸರದ್ದು ಎಂಬ ಭಾವವು ''ಧೀಮಹಿ'' ಪದದಿಂದ ಸೂಚಿತವಾಗುತ್ತದೆ.

ಈ ಅರ್ಥದ ಚಿಂತನದೊಂದಿಗೆ ಗಾಯತ್ರಿ ಮಂತ್ರವನ್ನು ಜಪಿಸಿದರೆ ಶ್ರೀ ವ್ಯಾಸರು ವಿಶೇಷವಾಗಿ ಬುದ್ಧಿ ಸಂಪತ್ತನ್ನು ಅನುಗ್ರಹಿಸುತ್ತಾರೆ.

ಶ್ರೀ ವ್ಯಾಸರು ಅಜ್ಞಾನವನ್ನು ಅಪಕರ್ಷಣಮಾಡಿದ ಮಹಾನುಭಾವರು. ಆದುದರಿಂದ ನೀಲ ಮೇಘ ಶ್ಯಾಮರಾದ ಅವರು ''ಶ್ರೀಕೃಷ್ಣರು''. ಅವರ ಜಯಂತಿಯೂ ''ಶ್ರೀಕೃಷ್ಣಜಯಂತಿ'' ಕಲಿಯುಗದಲ್ಲಿ ಕಲಿ ಮಾಲಿನ್ಯವನ್ನು ಪರಿಹರಿಸುವ ಯಾದವ ಕೃಷ್ಣ - ವಾಸಿಷ್ಠ ಕೃಷ್ಣರು ವಿಶೇಷವಾಗಿ ಉಪಾಸ್ಯರು. ಆದುದರಿಂದ ವೈಶಾಖ ಶುದ್ಧ ದ್ವಾದಶಿಯಂದು ವಿಶೇಷ ಜ್ಞಾನ ಸೇವೆಯ ಮೂಲಕ ವಾಸಿಷ್ಠ ಕೃಷ್ಣ ಜಯಂತಿಯನ್ನು ಆಚರಿಸಿ ಸರ್ವಸಜ್ಜನರು ಕೃತಾರ್ಥರಾಗ ಬೇಕು.

- ಶ್ರೀ ಕೃಷ್ಣಾರ್ಪಣಮಸ್ತು -